ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಸೋಮವಾರ, ದಿನಾಂಕ : 28 ನೇ ಸೆಪ್ಟೆಂಬರ್, 2020

ಮಾನವ ಪ್ರಾಣಿ ಸಂಘರ್ಷ, ಹಾನಿ, ಪರಿಹಾರದ ಬಗ್ಗೆ

ಶ್ರೀ ಕೆ. ಗೋವಿಂದರಾಜ್ (ವಿಧಾನಸಭೆಯಿಂದ ಚುನಾಯಿತರಾದವರು) :-

771 (983) ಮಾನ್ಯ ಅರಣ್ಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಕಳೆದ ಮೂರು ವರ್ಷಗಳ ಅವಧಿಯಲ್ಲಿ ಕಾಡು ಪ್ರಾಣಿಗಳಿಂದ ಆಗಿರುವ ಪ್ರಾಣ ಹಾನಿ, ಬೆಳೆ ನಾಶ ಕುರಿತ ಅಂದಾಜು ಸರ್ಕಾರಕ್ಕಿದೆಯೇ ; (ಪ್ರತ್ಯೇಕವಾದ ಸಂಪೂರ್ಣ ಮಾಹಿತಿ ಒದಗಿಸುವುದು)

(ಆ) ಪದೇ ಪದೇ ಕಾಡು ಪ್ರಾಣಿಗಳಿಂದ ಆಗುತ್ತಿರುವ ಪ್ರಾಣ ಹಾನಿ, ಬೆಳೆ ನಾಶಕ್ಕೆ ಇರಬಹುದಾದ ಕಾರಣವೇನು ; (ಪೂರ್ಣ ಮಾಹಿತಿ ಒದಗಿಸುವುದು)

(ಇ) ಕಾಡು ಪ್ರಾಣಿಗಳಿಂದಾಗುತ್ತಿರುವ ಹಾನಿಗೆ ಇದುವರೆವಿಗೆ ಒದಗಿಸಲಾಗಿರುವ ಪರಿಹಾರ ಎಷ್ಟು ; ಯಾವ ನಿಯಮಾವಳಿ ಮತ್ತು ಕಾನೂನಾತ್ಮಕ ಅಂಶಗಳನ್ನು ಈ ನಿಟ್ಟಿನಲ್ಲಿ ಅನುಸರಿಸಲಾಗುತ್ತಿದೆ ; (ಮಾಹಿತಿ ಒದಗಿಸುವುದು)

(ಈ) ಪದೇ ಪದೇ ಉಂಟಾಗುತ್ತಿರುವ ಈ ಮಾನವ-ಪ್ರಾಣಿ ಸಂಘರ್ಷ, ಪ್ರಾಣಹಾನಿ, ಬೆಳೆ ನಾಶ ನಿಯಂತ್ರಿಸುವ ನಿಟ್ಟಿನಲ್ಲಿ ಸರ್ಕಾರದ ದೀರ್ಘಾವಧಿ ಆಲೋಚನೆಯೇನು ? (ಮಾಹಿತಿ ಒದಗಿಸುವುದು)